# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 267
ಸದಸ್ಯರ ಹೆಸರು : ಶ್ರೀ ಹೆಚ್.ಎಂ. ರಮೇಶ ಗೌಡ(ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ & ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ & ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಸಚಿವರು
ಉತ್ತರಿಸಬೇಕಾದ ದಿನಾಂಕ : 14-09-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅನೇಕ ಗ್ರಾಮೀಣ ಪ್ರದೇಶದ ಮಕ್ಕಳು ಕಲಿಯುತ್ತಿರುವ ಅಂಗನವಾಡಿ ಕಟ್ಟಡಗಳಲ್ಲಿ ಶೌಚಾಲಯ, ಕುಡಿಯುವ ನೀರು ಮುಂತಾದ ಮೂಲಭೂತ ಸೌಕರ್ಯಗಳಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಈ ಅಂಗನವಾಡಿಗಳ ಅಭಿವೃದ್ಧಿಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; ನಿವೇಶನ ರಹಿತ ಅಂಗನವಾಡಿಗಳಿಗೆ ಶೀಘ್ರ ನಿವೇಶನ ನೀಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ಮಾಹಿತಿ ನೀಡುವುದು) | 1. 2021-22ನೇ ಸಾಲಿನಲ್ಲಿ 3524 ಶೌಚಾಲಯಗಳ ನಿರ್ಮಾಣಕ್ಕಾಗಿ, 14948 ಅಂಗನವಾಡಿ ವಿದ್ಯುತ್‌ಶಕ್ತಿ ಸೌಲಭ್ಯಕ್ಕಾಗಿ ಮತ್ತು 18974 ಅಂಗನವಾಡಿ ಕೇಂದ್ರಗಳಿಗೆ ಫ್ಯಾನ್ಸ್ ಸೌಲಭ್ಯ ಒಳಗೊಂಡಂತೆ ಮೂಲಭೂತ ಸೌಕರ್ಯಗಳನ್ನು ರೂ.4031.28 ಲಕ್ಷಗಳಲ್ಲಿ ಒದಗಿಸಲು ದಿನಾಂಕ:06.08.2021ರ ಆದೇಶದಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.<br><br>2. ರಾಜ್ಯದಲ್ಲಿರುವ ಸ್ವಂತ ಮತ್ತು ಇತರೆ ಸರ್ಕಾರಿ ಕಟ್ಟಡಗಳಲ್ಲಿ ನಡೆಯುತ್ತಿರುವ ಅಂಗನವಾಡಿ ಕೇಂದ್ರಗಳ ದುರಸ್ಥಿಗಾಗಿ ಪ್ರತಿ ವರ್ಷ ಘಟಕ ವೆಚ್ಚ ರೂ.50,000/- ರಂತೆ ಒಟ್ಟು ರೂ.2500.00 ಲಕ್ಷಗಳನ್ನು ಸಂಬಂಧಪಟ್ಟ ತಾಲ್ಲೂಕು ಪಂಚಾಯತಿಗಳಿಗೆ ನೇರವಾಗಿ ಆರ್ಥಿಕ ಇಲಾಖೆಯಿಂದ ಬಿಡುಗಡೆಯಾಗುತ್ತಿದೆ. ಸುತ್ತೋಲೆ ದಿನಾಂಕ:17.08.2021ರಲ್ಲಿ ಅಂಗನವಾಡಿ ಕಟ್ಟಡಗಳ ನಿರ್ವಹಣೆ ಯೋಜನೆಯಡಿ 2021-22ನೇ ಸಾಲಿನಲ್ಲಿ ಒದಗಿಸಲಾದ ರೂ.25.00 ಕೋಟಿ ಅನುದಾನವನ್ನು ಅಂಗನವಾಡಿ ಕೇಂದ್ರಗಳ ಮೂಲಭೂತ ಸೌಕರ್ಯಗಳಿಗಾಗಿ ವಿನಿಯೋಗಿಸಲು ತಾಲ್ಲೂಕು ಪಂಚಾಯತಿಗಳಿಗೆ ಸೂಚಿಸಲಾಗಿದೆ.<br><br>3. ಭಾರತ ಸ್ವಾತಂತ್ರ್ಯದ ಅಮೃತ ಮಹೋತ್ಸವದ ಪ್ರಯುಕ್ತ ಅಮೃತ ಅಂಗನವಾಡಿ ಯೋಜನೆಯಡಿ 750 ಅಂಗನವಾಡಿ ಕೇಂದ್ರಗಳ ಮೂಲಭೂತ ಸೌಕರ್ಯಗಳನ್ನು ತಲಾ 1.00 ಲಕ್ಷಗಳಂತೆ ಒಟ್ಟು ರೂ.750 ಲಕ್ಷಗಳ ವೆಚ್ಚದಲ್ಲಿ ಮೇಲ್ದರ್ಜೆಗೇರಿಸಲು ದಿನಾಂಕ:23.08.2021ರ ಆದೇಶದಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.<br><br>4. ಮಾನ್ಯ ಇಲಾಖಾ ಸಚಿವರಿಂದ ರಾಜ್ಯದ ಎಲ್ಲಾ ಶಾಸಕರು ಹಾಗೂ ಎಲ್ಲಾ ಜಿಲ್ಲಾ ಉಸ್ತುವಾರಿ ಸಚಿವರುಗಳಿಗೆ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳಿಂದ ಎಲ್ಲಾ ಜಿಲ್ಲೆಗಳ ಮಹಾಪೌರರು, ಪಾಲಿಕೆ ಸದಸ್ಯರು ಮತ್ತು ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳಿಗೆ, ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಂದ ಎಲ್ಲಾ ಜಿಲ್ಲೆಗಳ ಮಹಾನಗರ ಪಾಲಿಕೆಗಳ ಆಯುಕ್ತರುಗಳಿಗೆ ಸ್ವಂತ ಕಟ್ಟಡವಿಲ್ಲದ ಅಂಗನವಾಡಿ ಕೇಂದ್ರಗಳಿಗೆ ಕಟ್ಟಡ ನಿರ್ಮಿಸಲು ನಿವೇಶನ ಒದಗಿಸುವ ಕುರಿತು ಅರೆ ಸರ್ಕಾರಿ ಪತ್ರದ ಮೂಲಕ ಶೀಘ್ರವೇ ನಿವೇಶನ ದೊರಕಿಸಿ ಕೊಡಲು ಕೋರಲಾಗಿದೆ. |

| | | |
|---|---|---|
| | | ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರಿಂದ ಕಾಲಕಾಲಕ್ಕೆ, ಜಿಲ್ಲಾ ಉಪ ನಿರ್ದೇಶಕರುಗಳಿಗೆ ಪತ್ರಿಸಿ, ಇತರೆ ಇಲಾಖಾ ಅಧಿಕಾರಿಗಳ ಜೊತೆ ಸೂಕ್ತ ಹಿಂಬಾಲಿಕ ಕ್ರಮ ಅನುಸರಿಸಿ ಅಂಗನವಾಡಿ ಕೇಂದ್ರಗಳಿಗೆ ಸ್ವಂತ ನಿವೇಶನ ಪಡೆದುಕೊಳ್ಳುವ ಸಲುವಾಗಿ ಕ್ರಮವಹಿಸಲು ಸೂಚಿಸಲಾಗುತ್ತಿದೆ. |
| ಇ) | ಪ್ರಸಕ್ತ ಸಾಲಿನಲ್ಲಿ ಮಹಿಳಾ ಕಲ್ಯಾಣ ಕಾರ್ಯಕ್ರಮಗಳು, ಮಕ್ಕಳ ಕಾರ್ಯಕ್ರಮಗಳು ಹಾಗೂ ಸಾಮಾಜಿಕ ರಕ್ಷಣಾ ಕಾರ್ಯಕ್ರಮಗಳಿಗೆ ಮೀಸಲಿಟ್ಟ ಹಣವೆಷ್ಟು; ಎಷ್ಟು ಹಣ ಬಳಕೆಯಾಗಿದೆ? (ಸಂಪೂರ್ಣ ವಿವರ ನೀಡುವುದು) | ಪ್ರಸಕ್ತ ಸಾಲಿನಲ್ಲಿ ಮಹಿಳಾ ಕಲ್ಯಾಣ ಕಾರ್ಯಕ್ರಮಗಳು, ಮಕ್ಕಳ ಕಾರ್ಯಕ್ರಮಗಳು ಹಾಗೂ ಸಾಮಾಜಿಕ ರಕ್ಷಣಾ ಕಾರ್ಯಕ್ರಮಗಳಿಗೆ ಮೀಸಲಿಟ್ಟ ಹಾಗೂ ಬಳಕೆಯಾಗಿರುವ ಅನುದಾನದ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |

**ಸಂಖ್ಯೆ**: ಮಮಇ 219 ಐಸಿಡಿ 2021

Halappa

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು
ಹಿರಿಯ ನಾಗರೀಕರ ಸಬಲೀಕರಣ ಸಚಿವರು.

# ಅನುಬಂಧ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಡಿ ಪ್ರಸಕ್ತ ಸಾಲಿನಲ್ಲಿ ಮಹಿಳಾ ಕಲ್ಯಾಣ, ಮಕ್ಕಳ ಕಾರ್ಯಕ್ರಮಗಳು ಹಾಗೂ ಸಾಮಾಜಿಕ ರಕ್ಷಣಾ ಕಾರ್ಯಕ್ರಮಗಳಿಗೆ ಮೀಸಲಿಟ್ಟ ಹಾಗೂ ಬಳಕೆಯಾಗಿರುವ ಅನುದಾನದ ವಿವರ (ರೂ.ಲಕ್ಷಗಳಲ್ಲಿ)

| ಕ. ಸಂ. | ಕಾರ್ಯಕ್ರಮದ ಹೆಸರು ಮತ್ತು ಲೆಕ್ಕ ಶೀರ್ಷಿಕೆ | ಮೀಸಲಿಟ್ಟ ಅನುದಾನ | ಬಳಕೆಯಾದ ಅನುದಾನ ಆಗಸ್ಟ್-2021ರ ಅಂತ್ಯಕ್ಕೆ |
|---|---|---|---|
| ಅ) | ಮಕ್ಕಳ ಕಾರ್ಯಕ್ರಮಗಳು | | |
| 1 | ಅಂಗನವಾಡಿ ಕಾರ್ಯಕರ್ತೆ ಮತ್ತು ಸಹಾಯಕಿಯರಿಗೆ ತರಬೇತಿ 2235-02-102-0-05-015 (CSS:SS-60:40) | 1.00 | 0.00 |
| 2 | ಉದ್ಯೋಗಿ ಮಾತೆಯರ ಮಕ್ಕಳಿಗಾಗಿ ಶಿಶುವಿಹಾರಗಳು(CSS:SS-60:40) 2235-02-102-0-13 | 500.00 | 0.00 |
| 3 | ಮಹಿಳಾ ಮತ್ತು ಮಕ್ಕಳ ಅನೈತಿಕ ಸಾಗಾಟಕ ನಿವಾರಣೆಯ ಯೋಜನೆ 2235-02-102-0-24 | 30.00 | 0.00 |
| 4 | ಭಾಗ್ಯಲಕ್ಷ್ಮಿ ಯೋಜನೆ 2235-02-102-0-25 | 10180.00 | 0.00 |
| 5 | ಹೊಯ್ಸಳ ಮತ್ತು ಕೆಳದಿ ಚೆನ್ನಮ್ಮ ಪ್ರಶಸ್ತಿ 2235-02-102-0-27 | 30.00 | 0.00 |
| 6 | ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ಕರ್ನಾಟಕ ರಾಜ್ಯ ಆಯೋಗ 2235-02-102-0-28 | 211.00 | 36.14 |
| 7 | ಬಾಲವಿಕಾಸ ಅಕಾಡೆಮಿ 2235-02-102-0-31 | 52.00 | 0.00 |
| 8 | ಬೇಟಿ ಬಚಾವೊ ಬೇಟಿ ಪಡಾವೊ 2235-02-102-0-41 (CSS:100%) | 0.00 | 49.24 |
| 9 | ಕೇಂದ್ರ ಪುರಸ್ಕೃತ ಯೋಜನ-ಪೋಷಣ ಅಭಿಯಾನ (ರಾಷ್ಟ್ರೀಯ ಪೌಷ್ಟಿಕಾಂಶ ಅಭಿಯಾನ)2235-02-102-0-43 | 8500.00 | 0.00 |
| 10 | ಸರ್ಕಾರಿ ಕಛೇರಿಗಳಲ್ಲಿ ಶಿಶುವಿಹಾರಗಳು 2235-02-102-0-45 | 300.00 | 0.00 |
| 11 | ಮಕ್ಕಳ ದಿನಾಚರಣೆ 2235-02-102-0-99-100 | 0.00 | 0.00 |
| 12 | ಮಹಿಳಾ ದಿನಾಚರಣೆ 2235-02-102-0-99-100 | 1.00 | 0.00 |
| 13 | ಬಾಲ ಭವನ, ಬಾಲ ಸೇವಾ ಸಂಸ್ಥೆಗಳು ಹಾಗೂ ಶಿಶು ಮಾರ್ಗದರ್ಶನ ಕೇಂದ್ರ 2235-02-102-0-99 (003, 101, 103, 115) | 463.00 | 3.75 |
| 14 | ನಿರ್ಗತಿಕ ಮಕ್ಕಳ ಕುಟೀರ ಯೋಜನೆ 2211-00-102-0-26 | 599.65 | 1.49 |
| 15 | ದುಡಿಯುವ ಮಹಿಳೆಯರ ಮಕ್ಕಳಿಗೆ ಶಿಶುಪಾಲನಾ ಕೇಂದ್ರ 2211-00-102-0-63 (TP) | 20.00 | 2.31 |
| 16 | ಶಾಲಾ ಪೂರ್ವ ಮಕ್ಕಳ ಊಟದ ಯೋಜನೆ 2235-00-101-0-61 (TP) (CSS: SS - 50:50) | 197319.24 | 78553.62 |
| ಆ) | ಮಹಿಳಾ ಕಾರ್ಯಕ್ರಮಗಳು | | |
| 17 | ಮಹಿಳಾ ರಕ್ಷಣೆ ಮತ್ತು ಸಬಲೀಕರಣ ಅಭಿಯಾನ 2235-02-103-0-32 | 200.00 | 0.00 |
| 18 | ಸ್ತ್ರೀಶಕ್ತಿ ಯೋಜನೆ 2235-02-103-0-41 | 667.00 | 34.73 |
| 19 | ಪ್ರಾಯಪೂರ್ವ ಬಾಲಕಿಯರ ಸಬಲೀಕರಣ ರಾಜೀವ್ ಗಾಂಧಿ ಯೋಜನೆ (ಸಬಲ) ಪೌಷ್ಟಿಕಾಂಶ (CSS:SS - 50:50) & ಪೌಷ್ಟಿಕೇತರಾಂಶ (CSS:SS - 60:40) 2235-02-103-0-46 | 319.00 | 0.00 |
| 20 | ಕೌಟುಂಬಿಕ ದೌರ್ಜನ್ಯದ ವಿರುದ್ಧ ಮಹಿಳೆಯರಿಗೆ ರಕ್ಷಣೆ ನೀಡುವ ಯೋಜನೆ 2235-02-103-0-52 | 553.00 | 183.13 |
| 21 | ಪ್ರಧಾನ ಮಂತ್ರಿ ಮಾತೃ ವಂದನಾ ಯೋಜನೆ (CSS: SS - 60:40) 2235-02-103-0-61-059 | 5155.00 | 1838.36 |
| 22 | ಸ್ವಾಧಾರ ಗೃಹ 2235-02-103-0-64-059 | 454.75 | 0.00 |
| 23 | ಉಜ್ವಲ ಯೋಜನೆ 2235-02-103-0-67 | 200.00 | 0.00 |
| 24 | ಬಾಲಕಿಯರ ವಸತಿ ನಿಲಯ 2235-02-103-0-99-100 | 495.00 | 0.00 |

| | | | |
|---|---|---|---|
| 25 | ಸಾಂತ್ವನ ಯೋಜನೆ<br>2235-02-103-0-99-100 | 800.00 | 0.00 |
| 26 | ಅಂಗನವಾಡಿ ಕಾರ್ಯಕರ್ತೆಯರಿಗೆ ನೂತನ ಪಿಂಚಣೆ ವ್ಯವಸ್ಥೆ<br>2235-60-103-0-01 | 1000.00 | 0.00 |
| 27 | ಅಂ.ಕಾರ್ಯಕರ್ತೆ/ಸಹಾಯಕಿಯರ ಮರಣ ಪರಿಹಾರ ನಿಧಿ<br>2235-60-103-0-01 | 75.00 | 0.00 |
| 28 | ಕರ್ನಾಟಕ ರಾಜ್ಯ ಮಹಿಳಾ ಆಯೋಗ<br>2235-02-103-0-99 (101, 103) | 985.00 | 0.00 |
| ಇ) | **ಸಾಮಾಜಿಕ ರಕ್ಷಣಾ ಕಾರ್ಯಕ್ರಮಗಳು** | | |
| 29 | ರಾಜ್ಯ ಮಹಿಳಾ ನಿಲಯ ಮತ್ತು ಸ್ವೀಕಾರ ಕೇಂದ್ರ 2235-02-106-0-06 | 679.00 | 168.81 |
| 30 | ನಿಮ್ಹಾನ್ಸ ಮತು ಎನ್.ಎಲ್.ಎಸ್.ಯು.ಐ. ಸಹಯೋಗದೊಂದಿಗೆ ಸುಧಾರಣಾ ಸಂಸ್ಥೆಯ ಸಮುಚ್ಚಯದಲ್ಲಿ ಪರಿಣಿತಿ ಕೇಂದ್ರದ ಸ್ಥಾಪನೆ 2235-02-106-0-15 | 100.00 | 0.00 |
| | **ಒಟ್ಟು** | **229889.64** | **80871.58** |

ಷರಾ: ಕ್ರ.ಸಂ.:8, ಬೇಟಿ ಬಚಾವೋ ಬೇಟಿ ಪಡಾವೋ ಯೋಜನೆಗೆ ಕೇಂದ್ರ ಸರ್ಕಾರದಿಂದ ನೇರವಾಗಿ ಅನುದಾನವನ್ನು ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗುತ್ತಿದೆ.

## ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ

2021-22ನೇ ಸಾಲಿನಲ್ಲಿ ಮಹಿಳಾ ಕಲ್ಯಾಣಕ್ಕಾಗಿ, ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮದಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು, ಮೀಸಲಿಟ್ಟ ಹಣ ಮತ್ತು ಆಗಸ್ಟ್ 2021ರ ಅಂತ್ಯದವರೆಗೆ ಬಳಕೆಯಾದ ಹಣದ ವಿವರ.

(ರೂ.ಲಕ್ಷಗಳಲ್ಲಿ)

| ಕ್ರಸಂ | ಯೋಜನೆಯ ಹೆಸರು | ಮೀಸಲಿಟ್ಟ ಹಣ (2021-22) | ಬಳಕೆಯಾದ ಹಣ (ಆಗಸ್ಟ್ 2021ರ ಅಂತ್ಯಕ್ಕೆ) | ಷರಾ |
|---|---|---|---|---|
| 1 | ಮಾಜಿ ದೇವದಾಸಿಯರಿಗೆ ಮಾಸಾಶನ | 5436.00 | 879.60 | DBT Portal ನಲ್ಲಿ ಫಲಾನುಭವಿಗಳ ಮಾಹಿತಿಗಳನ್ನು ಅಳವಡಿಸಲು ಕ್ರಮವಹಿಸಲಾಗುತ್ತಿದೆ. |
| 2 | ಕೆಎಸ್‌ಎಫ್‌ಸಿ ಮುಖಾಂತರ ಬಡ್ಡಿ ಸಹಾಯಧನ ಯೋಜನೆ | 5800.00 | 1450.00 | ಕೆ.ಎಸ್.ಎಫ್.ಸಿ ಗೆ ಬಿಡುಗಡೆಮಾಡಿದೆ. |
| 3 | ಉದ್ಯೋಗಿನಿ | 1500.00 | 0.00 | ಫಲಾನುಭವಿಗಳ ಆಯ್ಕೆ ಪ್ರಕ್ರಿಯೆ ಪ್ರಗತಿ ಹಂತದಲ್ಲಿದೆ. |
| 4 | ಕಿರುಸಾಲ | 300.00 | 0.00 | |
| 5 | ಲಿಂಗತ್ವ ಅಲ್ಪಸಂಖ್ಯಾತರ ಪುನರ್ವಸತಿ | 300.00 | 0.00 | |
| 6 | ಮಹಿಳಾ ತರಬೇತಿ | 50.00 | 0.00 | |
| 7 | ಚೇತನಾ ಹಾಗೂ ದೇವದಾಸಿ ಪುನರ್ವಸತಿ | 535.00 | 0.00 | |
| 8 | ಧನಶ್ರೀ | 200.00 | 0.00 | |

*******